ಸದ್ಗ್ರಂಥವು ನಮ್ಮ ಸಂಶಯಗ್ರಂಥಿ ಭೇದನವನ್ನು ಮಾಡಿ ಆತ್ಮಸ್ವರೂಪವನ್ನು ತೋರಿಸುವುದರಲ್ಲಿ ಸಂದೇಹವಿಲ್ಲವೆಂದು ನಾನು ಪ್ರಮಾಣಿಸಬಲ್ಲೆನು.

ದ್ವೈತ, ಅದ್ವೈತ, ವಿಶಿಷ್ಟಾದ್ವೈತಗಳೆಂಬ ಮೂರು ಸಿದ್ಧಾಂತಗಳೂ ಪರಸ್ಪರ ವಿರೋಧಿಸದಂತೆ ಈ ಗ್ರಂಥಕರ್ತರು ಅನೇಕ ಉಪನಿಷತ್ ಸಾರವಾಕ್ಯಗಳನ್ನು ಉದಾಹರಿಸಿ ಸ್ವಾನುಭವದೊಂದಿಗೆ ವಿಚಾರಿಸಿರುತ್ತಾರೆ. ಆಸ್ತಿಕ ಮಹನೀಯರಿದನ್ನು ಅವಲೋಕಿಸಿ ಸಾರಗ್ರಾಹಿಗಳಾಗಿ ಶಾರೀರ, ಆಧ್ಯಾತ್ಮಿಕ ತತ್ವನಿಷ್ಠರಾಗಲು ಸಂದೇಹವಿಲ್ಲ. ಇಂತಹ ಗ್ರಂಥಕರ್ತರು ಪ್ರಕೃತಸ್ಥಿತಿಯಲ್ಲಿ ವಿರಳರೆಂದೇ ವಚಿಸಬಲ್ಲೆನು. ಪ್ರತಿಯೊಬ್ಬರಲ್ಲಿಯೂ ಈ ಗ್ರಂಥವು ಇರತಕ್ಕದ್ದಾಗಿದೆ.

---

ಶ್ರೀಮಾನ್ ಮೈಸೂರು ಮಹಾರಾಜರವರ ಆಸ್ಥಾನದ ಮಹಾವಿದ್ವಾನ್ ಪೌರಾಣಿಕರತ್ನ ವೇ|| ಬ್ರಂಹ|| ಶ್ರೀ|| **ಹೊಳವನಹಳ್ಳಿ ಶೇಷಾಚಾರ್ಯರವರ** ಅಭಿಪ್ರಾಯವು.

ಶ್ರೀಮಾನ್ ಮ|| ರಾ|| ಯಡತೊರೆ ಸುಬ್ರಾಯರು ಪೂರ್ವಾರ್ಜಿತ ಪುಣ್ಯದಿಂದ ಶ್ರೀರಾಮಭಕ್ತರಾದರು. ಇವರು ಶ್ರೀರಾಮೋತ್ಸವ ಸೇವಾದಿಗಳನ್ನು ತ್ರಿಕರಣ ಶುದ್ಧಿಯಿಂದ ಬಹುವರ್ಷಗಳಿಂದ ಮಾಡಿದರು. ಪ್ರಸನ್ನನಾದ ಶ್ರೀರಾಮಚಂದ್ರ ಮೂರ್ತಿಯ ಪ್ರೇರಣೆಯಿಂದಲೇ ಶ್ರೀಮದ್ರಾಮಾಯಣದ ಗೂಡಾರ್ಥವನ್ನು ಅಧ್ಯಾತ್ಮಪರವಾಗಿ ನಿರೂಪಿಸುವ ವಿಸ್ತಾರವಾದ ಗ್ರಂಥವನ್ನು ರಚಿಸಿರುತ್ತಾರೆ. ಇವರು ಸಂಸ್ಕೃತ ವಿದ್ಯಾವ್ಯಾಸಂಗ ವಿಶೇಷವಾಗಿ ಮಾಡದೆ ಇದ್ದರೂ ಇವರಿಗೆ ಗೂಡಾರ್ಥ ಸ್ಫುರಣವು ಶ್ರೀರಾಮಾನುಗ್ರಹದಿಂದಲೇ ಆಗಿರುವುದಾಗಿ ತಿಳಿಯಬೇಕಾಗಿದೆ. ದ್ರವ್ಯೋಪಪತ್ತಿ ಇಲ್ಲದಿದ್ದರೂ ಲೋಕೋಪಕಾರ ಕುತೂಹಲಿಗಳಾಗಿ ಮುದ್ರಣಮಾಡಿಸಿರುತ್ತಾರೆ. ತತ್ವಾರ್ಥಗ್ರಹಣಮಾಡುವ ಜನರಿಗೆ ಅತ್ಯುಪಕಾರಕವಾಗಿರುವ ಈ ಗ್ರಂಥವನ್ನು ನಾನು ನೋಡಿ ಬಹು ಸಂತುಷ್ಟನಾಗಿರುತ್ತೇನೆ. ವಿದ್ಯಾಪಕ್ಷಪಾತಿಗಳೂ ಮತ್ತು ಶ್ರೀರಾಮಭಕ್ತರೂ ಆದ ಮಹಾಜನರು ಈ ಪುಸ್ತಕವನ್ನು ತೆಗೆದುಕೊಂಡು ಆಮೂಲಾಗ್ರವಾಗಿ ಪಠನಮಾಡಿ ಗ್ರಂಥಕಾರರ ಶ್ರಮವನ್ನು ಸಾರ್ಥಕಪಡಿಸಬೇಕೆಂದು ಕೋರುತ್ತೇನೆ.

---

ದ್ರಾವಿಡ ದಿವ್ಯಪ್ರಬನ್ಧವನ್ನು ಸಂಸ್ಕೃತ ಶ್ಲೋಕವಾಗಿ ತರ್ಜುಮೆ ಮಾಡಿರುವ ಮತ್ತು ವೇದಾಂತ ಗ್ರಂಥಗಳನ್ನು ರಚಿಸಿರುವ, ಬೆಂಗಳೂರು ಸೆಂಟ್ರಲ್ ಕಾಲೇಜ್ ರಿಟೈರ್ಡು ಸಂಸ್ಕೃತ ಪ್ರೊಫೆಸರ್ **ಶ್ರೀಮಾನ್|| ವೇ|| ಎಂ. ಟಿ. ನರಸಿಂಹ ಅಯ್ಯಂಗಾರ್ರವರ** ಅಭಿಪ್ರಾಯವು.

"ಮಲ್ಲೇಶ್ವರದಲ್ಲಿರುವ ಮ|| ರಾ|| ಎಡತೊರೆ ಸುಬ್ಬರಾಯರನ್ನು ಅನೇಕ ಸಂವತ್ಸರಗಳಿಂದ ಬಲ್ಲೆನು. ಇವರು ಶ್ರೀ ರಾಮಚಂದ್ರಸ್ವಾಮಿಯ ಪರಮ ಭಕ್ತರು ಯೋಗಾನುಷ್ಠಾನಪರರು. ಇದೇ ಮಲ್ಲೇಶ್ವರದಲ್ಲಿ ರಾಮಭಜನ ಸಭೆಯ ಕಾರ್ಯಗಳಲ್ಲಿ ಮುಖ್ಯಪಾತ್ರವನ್ನು ವಹಿಸಿದ್ದರು. ಇವರು ರಚಿಸಿರುವ "ಶ್ರೀ ಮದ್ರಾಮಾಯಣದ ಅಂತರಾರ್ಥ" ಗ್ರಂಥವನ್ನು ಕೈ ಬರವಣಿಗೆಯಲ್ಲಿದ್ದಾಗಲೇ ಕೆಲವು ಸಂವತ್ಸರಗಳ ಹಿಂದೆ ಅಲ್ಲಲ್ಲಿ ನನಗೆ ಅವರು ಓದಿ ಹೇಳಿದ್ದುದು ಜ್ಞಾಪಕವಿದೆ. ಈಗ ಅದು ಅಂದವಾಗಿ ಮುದ್ರಿತವಾಗಿದೆ. ಅಮೋಘವಾಗಿಯೂ, ವಿವರವಾಗಿಯೂ, ಯೋಗ ವೇದಾಂತಗಳ ಸಾರವಾಗಿಯೂ ಇರುವ ಈ ಗ್ರಂಥದ ಕೆಲವು ಭಾಗಗಳನ್ನು ಈಗಲೂ ಪರಿಶೀಲಿಸಿದೆನು. ನನಗೆ ಅತ್ಯಂತ ಸಂತೋಷವಾಯಿತು. ಎಲ್ಲಾ ಭಕ್ತರಿಗೂ, ವಿಚಾರ ಪರರಿಗೂ ಈ ಗ್ರಂಥವು ಅತ್ಯುಪಯುಕ್ತವಾದುದೆಂದು ಸಂತೋಷದಿಂದ ಸೂಚಿಸುತ್ತೇನೆ.

---

ಮೈಸೂರು ಯೂನಿವರ್ಸಿಟಿ ರಿಟೈರ್ಡ್ ರಿಜಿಸ್ಟ್ರಾರ್ ಮತ್ತು ಶ್ರೀಮನ್ಮಹಾರಾಜರವರ ಸಂಸ್ಕೃತ ಮಹಾಪಾಠಶಾಲಾ ಪ್ರೆಸಿಡೆಂಟರಾದ ಮ || ರಾ || **ವಿ. ಸುಬ್ರಹ್ಮಣ್ಯಯ್ಯ**ರವರ ಅಭಿಪ್ರಾಯವು.

ಶ್ರೀಮಾನ್ ಯಡತೊರೆ ಸುಬ್ರಾಯಶರ್ಮ ಎಂಬುವರು ರಚಿಸಿರುವ ಶ್ರೀಮದ್ರಾಮಾಯಣದ ಅಂತರಾರ್ಥ ಎಂಬ ಗ್ರಂಥವನ್ನು ಬಹು ಆನಂದದಿಂದ ಪಠಿಸಿದೆನು. ಈ ಗ್ರಂಥದಲ್ಲಿ ದೊಡ್ಡದಾದ ಶ್ರೀ ರಾಮಚರಿತ್ರೆಯಲ್ಲಿನ ಅಂತರಾರ್ಥವನ್ನು ನವೀನ ರೀತಿಯಲ್ಲಿ ಹೊರಪಡಿಸಿರುವುದು ಅತ್ಯಂತ ಸಂತೋಷಕರವಾಗಿದೆ. ಈ ಗ್ರಂಥ ರಚನೆಯ ವಿಷಯದಲ್ಲಿ ಇವರು ತಮ್ಮ ಪ್ರತಿಭೆಯನ್ನು ತೋರಿಸಿರುವರಲ್ಲದೆ ಬಹು ಗೌರವದಿಂದ ನೋಡಲ್ಪಡುವ ಶ್ರೀಮದ್ರಾಮಾಯಣದಲ್ಲಿ ರಾಜಯೋಗ ಸಂಬಂಧವಾದ ಅರ್ಥವನ್ನು ದೊಡ್ಡಪ್ರಯತ್ನದಿಂದ ಕಂಡುಹಿಡಿದಿರುವರು. ಈ ಗ್ರಂಥದ ಯೋಗ್ಯತೆಯ ವಿಷಯದಲ್ಲಿ ಮೈಸೂರು ದೇಶೀಯ ಸುಪ್ರಸಿದ್ಧರಾದ ಪಂಡಿತರೂ ಪೂಜ್ಯರಾದ ಅನೇಕ ಮಠಾಧಿಪತಿಗಳೂ ತಮ್ಮ ತಮ್ಮ ಅನುಮೋದನೆಯನ್ನು ಕೊಟ್ಟಿರುತ್ತಾರೆ. ರಾಜಯೋಗದಲ್ಲಿಯೂ ಮತ್ತು ಶ್ರೀರಾಮತತ್ವಾಮೃತದಲ್ಲಿಯೂ ಆಸಕ್ತಿಯುಳ್ಳ ಸಮಸ್ತರಿಗೂ ಈ ಗ್ರಂಥವು ಬಹು ಉಪಕಾರಕವಾಗಿದೆ.

---

ಮೈಸೂರು ಶ್ರೀಮನ್ಮಹಾರಾಜರವರ ಸಂಸ್ಕೃತ ಮಹಾಪಾಠಶಾಲಾ ಮೀಮಾಂಸಾ ಪ್ರಧಾನೋಪಾಧ್ಯಾಯರು ವೇ|| ಬ್ರಂಹ|| ಶ್ರೀ|| **ವಿದ್ವಾನ್ ಆರ್ಡೀಕೊಪ್ಪಂ ಸುಬ್ರಹ್ಮಣ್ಯಶಾಸ್ತ್ರಿಗಳವರ ಅಭಿಪ್ರಾಯವು.**

ವೇ॥ ಬ್ರಂ॥ ಯಡತೊರೆ ಸುಬ್ಬರಾಯ ಶರ್ಮಭಿಃ ವಿರಚಿತಂ **ಸಂಧ್ಯಾವೀಣಾ ತತ್ವಾರ್ಥ** ನಾಮಕಂ ಗ್ರಂಥಂ ಆಮೂಲಾಗ್ರಸು ಪಠಿತಂ । ತತ್ರವೀಣಾಯಾಃ ಗಾಯತ್ರ್ಯಾಶ್ಚ ಅತ್ಯಂತ ಸಾದೃಶ್ಯ ಮಸ್ತೀತಿ ಸರ್ವಪ್ರಮಾಣಾವಿರೋಧೇನ ನಿರೂಪಿತಂ ಸದ್ಯುಕ್ತ್ಯಾ ವೇದಾಪೌರುಷೇಯತ್ವಂಚ ಸಮರ್ಥಿತಂ । ಅನ್ಯೇಚ ಸೂಕ್ಷ್ಮತರಾ ವಿಷಯಾಃ ಅತ್ರಪ್ರದರ್ಶಿತಾಃ । ಅತಃ ಏತದ್ಗ್ರಂಥ ಕರ್ತಾರಃ ದೇವತಾನುಗ್ರಹಾದೇವ ಅಮಾನುಷೀಂಶಕ್ತಿಮವಲಂಬ್ಯ ಇಮಂಗ್ರಂಥಂ ವ್ಯರಚಯನ್ನಿತಿ। ಅಯಂ ಗ್ರಂಥಸ್ಸರ್ವೋಪಕಾರಕಶ್ಚ ವರ್ತತ ಇತಿ ಸುದೃಢ ಮಾವೇದಯಾಮಿ ॥

---

## THE OPINION OF DOCTOR SIR S. RADHAKRISHNAN, M.A., Ph.D., etc

Doctor of Philosophy of Universities of Calcutta and Oxford (London.)

Madras, 24—9—38

I have had the pleasure of reading in manuscripts the English translations of SANDHYA THATHWARTHA and VEENA RAHASYA by Mr. Y. Subbaraya Sarma. I was greatly impressed by the writer's learning and skill of interpretations. I have no doubt that those who read the works will find the reading both pleasant and profitable. I hope he will be enabled to publish these works and thus benefit a large circle of readers.

---

## THE OPINION OF PANDIT VISHVA BANDHU SASTRY, M.A., M.O.L.

Director, The Vishveshvarananda Vedic Research Institute, Benares.

In advising return of your typed script books SANDHYA THATHWARTHA, VEENA RAHASYA AND RAMAYANA ANTHARARTHA by registered post, I feel I must sincerely thank you for the deep and what is much more, devotional erudition which you have been

able to lavish on the themes treated in these works. I regard these works as an out-pouring of a heart that has been aiming at a superior spiritual elevation incident to its having subjected itself to a protracted course of faithfull, religious contemplation. Your works ought to be of great use to such devoted souls among the Hindus as are engaged on daily meditations and stand in need of symbolical interpretative framework on the basis of our most ancient and sacred vedic ideology

---

ಶ್ರೀಮನ್ ಮೈಸೂರು ಮಹಾರಾಜರವರ ಆಸ್ಥಾನದ ವೈಣಿಕ ವಿದ್ವಾನ್ ಮತ್ತು ಮೈಸೂರು ಗೌವರ್ನಮೆಂಟು ವಿದ್ಯಾಇಲಾಖಾ ಮ್ಯೂಜಿಕ್ ಪ್ರೊಫೆಸರ್ ಥೀರ್ಮರಾದ ವೈಣಿಕಪ್ರವೀಣ ಮ|| ರಾ|| ವಿ. ವೆಂಕಟಗಿರಿಯಪ್ಪನವರ ಅಭಿಪ್ರಾಯ.

ಮ|| ರಾ|| ಯಡತೊರೆ ಸುಬ್ರಾಯಶರ್ಮರು ರಚಿಸಿರುವ ವೀಣಾರಹಸ್ಯ ಗ್ರಂಥವನ್ನು ಅವಲೋಕಿಸಿದೆನು. ಶ್ರೀ ಶಾರದಾಂಬೆಯ ಹಸ್ತದಲ್ಲಿರುವ ಮಹಾ ವೀಣೆಯು ಮನುಷ್ಯಶರೀರ ಮತ್ತು ಬ್ರಹ್ಮಾಂಡದ ರಚನೆಯತತ್ವದ ಆಧಾರದ ಮೇಲೆ ಇರುವುದೆಂಬ ಮಹತ್ವವನ್ನು ಹೊರಸೂಸಿ ಒರೆದಿರುವರು ವಾದ್ಯಗಳಲ್ಲೆಲ್ಲಾ ಶ್ರೇಷ್ಠವಾದ ಅಸ್ಮದಾದಿಗಳು ನುಡಿಸುವ ವೀಣೆಯ ತಂತಿಗಳ ಮತ್ತು ಪ್ರತಿಯೊಂದು ಮನೆಯ ನಾದವು ವೇದ ಮತ್ತು ವಿಶ್ವದ ತತ್ವವನ್ನನುಸರಿಸಿರುತ್ತೆಂಬುದನ್ನು ಸ್ಪಷ್ಟಪಡಿಸಿರುವರು. ವೀಣೆಯನ್ನು ಮನುಷ್ಯಶರೀರಕ್ಕೂ ಅನ್ವಯಿಸಿ ಸಚಿತ್ರದೊಡನೆ ಬಹು ಮುದ್ದಾಗಿ ಬರೆದಿರುವರು. ಅಲ್ಲದೆ ಭರತಖಂಡದ ನಮ್ಮ ಸಂಗೀತಶಾಸ್ತ್ರವು ವಿಶ್ವದ ರಚನಾಕ್ರಮದ ತತ್ವದ ಅಸ್ತಿಭಾರವನ್ನು ಎಡಬಿಡದೆ ಅನುಸರಿಸಿಕೊಂಡು ಇರತಕ್ಕ ಶಾಸ್ತ್ರವೆಂಬುದನ್ನು ಎತ್ತಿತೋರಿಸಿರುವರು. ಇವರು ಬರೆದಿರತಕ್ಕ ತತ್ವಗಳನ್ನು ನಿರ್ಧರಿಸಲು ಅನೇಕ ಸಂಗೀತಶಾಸ್ತ್ರ ಮತ್ತು ಉಪನಿಷದ್ವಾಕ್ಯಗಳ ಆಧಾರವನ್ನು ಕೊಟ್ಟಿರುವರು. ಭರತಖಂಡದಲ್ಲಿ ಈ ವಿಧವಾಗಿ ನಿರೂಪಣೆಮಾಡಿದ ಗ್ರಂಥವು ಇದೇ ಪ್ರಥಮದುದಾಗಿರುತ್ತೆ. ನಾದೋಪಾಸಕರೂ ತತ್ವಪ್ರಿಯರೂ ಈ ಗ್ರಂಥವನ್ನು ಪರಮಾದರದಿಂದ ಸಂಗ್ರಹಿಸಿ ತತ್ವಗ್ರಾಹಿಗಳಾಗಬೇಕಾಗಿ ಕೋರುತ್ತೇನೆ. ಭರತಖಂಡದ ಸಂಗೀತಶಾಸ್ತ್ರದ ಮಹತ್ವವನ್ನು ಬಾಲ್ಯದಿಂದಲೂ ಅರಿತುಕೊಳ್ಳಲು ಅನುಕೂಲವಾಗುವಂತೆ ಈ ಅಪರೂಪವಾದ ಗ್ರಂಥವು ಪ್ರತಿಯೊಂದು ವಿದ್ಯಾಶಾಲೆಯಲ್ಲೂ ಇರತಕ್ಕದ್ದಾಗಿದೆ.